# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1181 (1474) |
| ಸದಸ್ಯರ ಹೆಸರು | ಶ್ರೀ ಆರ್ ಧರ್ಮಸೇನ |
| ಉತ್ತರಿಸುವ ದಿನಾಂಕ | 17-03-2021 |
| ಉತ್ತರಿಸುವವರು | ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ಮುಜರಾಯಿ ಇಲಾಖೆಯ ಕೇಂದ್ರ ಕಛೇರಿಯಲ್ಲಿ ಕಳೆದ 10 ವರ್ಷಗಳಿಂದ ದಿನಗೂಲಿ ಆಧಾರದಲ್ಲಿ ಸೇವೆ ಸಲ್ಲಿಸಿದ್ದ ಪರಿಶಿಷ್ಟ ಜಾತಿಗೆ ಸೇರಿದ ಸ್ವಚ್ಚತಾ ಕಾರ್ಮಿಕರನ್ನು ಕೆಲಸದಿಂದ ತೆಗೆದು ಹಾಕಿರುವುದು ನಿಜವೆ: ಹಾಗಿದ್ದಲ್ಲಿ ಅದಕ್ಕೆ ಕಾರಣವೇನು: | ಧಾರ್ಮಿಕ ದತ್ತಿ ಇಲಾಖೆಯ ಕೇಂದ್ರ ಕಛೇರಿಯಲ್ಲಿ ದಿನಗೂಲಿ ಆಧಾರದ ಮೇಲೆ ಸ್ವಚ್ಚತಾ ಕೆಲಸಗಾರರಾಗಿ ಕರ್ತವ್ಯ ನಿರ್ವಹಿಸಲು ಧಾರ್ಮಿಕ ದತ್ತಿ ಇಲಾಖೆಯ ಕಛೇರಿಯ ವಿವಿಧ ಆದೇಶಗಳನ್ವಯ ನಿಯೋಜಿಸಿಕೊಳ್ಳಲಾಗಿತ್ತು.<br><br>ಆದರೆ, ಸರ್ಕಾರದ ಆದೇಶ ಸಂಖ್ಯೆ: ಆಇ 3 ಟಿಎಫ್‌ಪಿ 2017, ದಿನಾಂಕ:07-07-2017ರಲ್ಲಿ ಯಾವುದೇ ಅಂಶಕಾಲಿಕ ಅಕುಶಲ/ಅನಿಪುಣ ಕೆಲಸಗಾರರನ್ನು ನೇಮಿಸಿಕೊಳ್ಳುವುದನ್ನು ನಿರ್ಬಂಧಿಸಲಾಗಿದೆ.<br><br>ಮೇಲಿನ ಆರ್ಥಿಕ ಇಲಾಖೆಯ ಆದೇಶದ ಹಿನ್ನೆಲೆಯಲ್ಲಿ, ಸದರಿ ಸ್ವಚ್ಛತಾಗಾರರನ್ನು ನಿಯೋಜಿಸಿಕೊಂಡ ಧಾರ್ಮಿಕ ದತ್ತಿ ಇಲಾಖೆಯ ಕೇಂದ್ರ ಕಛೇರಿಯಿಂದ ಹೊರಡಿಸಲಾದ ಎಲ್ಲಾ ಆದೇಶಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶಿಸಲಾಗಿರುತ್ತದೆ. |
| ಆ) | ದಿನಾಂಕ:17.07.2019ರಲ್ಲಿ ಧಾರ್ಮಿಕ ದತ್ತಿ ಇಲಾಖಾ ವ್ಯಾಪ್ತಿಗೆ ಒಳಪಡುವ ಅಧಿಸೂಚಿತ ದೇವಾಲಯ/ ಸಂಸ್ಥೆಗಳಲ್ಲಿ ತಾತ್ಕಾಲಿಕವಾಗಿ ಕೆಲಸ ನಿರ್ವಹಿಸುತ್ತಿದ್ದ ಸುಮಾರು 2500 ನೌಕರರನ್ನು ಪರಿಗಣಿಸಿ ವೇತನ ಶ್ರೇಣಿ ನೀಡಿರುವುದು ನಿಜವಲ್ಲವೆ: | ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ನಿಯಮಗಳು 2019ನ್ನು ಜಾರಿಗೆ ತಂದಿದ್ದು, ಸದರಿ ತಿದ್ದುಪಡಿ ನಿಯಮಗಳನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ:ಕಂಇ 54 ಮುಸೇವಿ 2017 ದಿನಾಂಕ:17.07.2019ರನ್ವಯ ಧಾರ್ಮಿಕ ದತ್ತಿ ಇಲಾಖಾ ವ್ಯಾಪ್ತಿಗೆ ಒಳಪಡುವ ಅಧಿಸೂಚಿತ ಸಂಸ್ಥೆಗಳಲ್ಲಿ/ ದೇವಾಲಯಗಳಲ್ಲಿ ವೇತನ ಶ್ರೇಣಿ ನಿಗದಿಯಾಗದೆ ಕರ್ತವ್ಯ ನಿರ್ವಹಿಸುತ್ತಿರುವ ದೇವಾಲಯದ ನೌಕರರಿಗೆ ವೇತನ ಶ್ರೇಣಿ ಮತ್ತು ಇತರ ಭತ್ಯೆಗಳನ್ನು ಕೆಲವು ಷರತ್ತಿಗೊಳಪಟ್ಟು ವೇತನ ಶ್ರೇಣಿ ನಿಗಧಿ ಪಡಿಸಿ ಆದೇಶಿಸಲಾಗಿರುತ್ತದೆ. |

| | | |
|---|---|---|
| ಇ) | ಅದೇ ರೀತಿ ಕಳೆದ 10 ವರ್ಷಗಳಿಂದ ತಾತ್ಕಾಲಿಕವಾಗಿ ಸೇವೆ ಸಲ್ಲಿಸುತ್ತಿರುವ ಪರಿಶಿಷ್ಟ ಜಾತಿಗೆ ಸೇರಿದ ಸ್ವಚ್ಛತಾ ಕಾರ್ಮಿಕರನ್ನು ಪುನರ್ ನೇಮಿಸಿ ವೇತನ ಶ್ರೇಣಿ ನೀಡಲು ಕ್ರಮ ಕೈಗೊಳ್ಳಲಾಗುವುದೇ? | ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 54 ಮುಸೇವಿ 2017 ದಿನಾಂಕ:17-07-2019ರನ್ವಯ ಅಧಿಸೂಚಿತ ಸಂಸ್ಥೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ದೇವಾಲಯದ ನೌಕರರಿಗೆ ಮಾತ್ರ ಅನ್ವಯಿಸಿರುವುದರಿಂದ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಆಇ 3 ಟಿಎಫ್‌ಪಿ 2017 ದಿನಾಂಕ:07-07-2017ರ ಆಧಾರದ ಮೇಲೆ ಈ ಕಛೇರಿಯಲ್ಲಿ ಹಿಂದೆ ಕರ್ತವ್ಯ ನಿರ್ವಹಿಸುತ್ತಿದ್ದ ಸ್ವಚ್ಛತಾಗಾರರನ್ನು ಕರ್ತವ್ಯದಿಂದ ಬಿಡುಗಡೆಗೊಳಿಸಿರುವುದರಿಂದ, ಸದರಿಯವರನ್ನು ಪುನರ್ ನೇಮಿಸಿ ವೇತನ ಶ್ರೇಣಿ ನೀಡುವ ಪ್ರಶ್ನೆ ಉದ್ಭವಿಸುವುದಿಲ್ಲ. |

ಸಂಖ್ಯೆ: ಕಂಇ 75 ಮುಸಪ್ರ 2021

**(ಕೋಟಾ ಶ್ರೀನಿವಾಸ ಪೂಜಾರಿ)**
ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ
ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.